# ಸ್ವಯಂಸೇವಾ/ಸ್ವಯಂಪ್ರೇರಿತ ಅಧ್ಯಾಪಕ ವೇದಿಕೆ(ಗಳು): ಯಾತ್ರೆಯ ಒಂದು ಅನುಭವ (ರಾಜಸ್ತಾನ)

ಅಭಿಷೇಕ್ ಸಿಂಗ್ ರಾಥೋರ್

## ಹಿನ್ನೆಲೆ ಮತ್ತು ಇತಿಹಾಸ

ಸ್ವಯಂಸೇವಾ/ಸ್ವಯಂಪ್ರೇರಿತ ಅಧ್ಯಾಪಕ ವೇದಿಕೆಗಳ ಬೆಳವಣಿಗೆಯು ಕೆಲ ಸಂಘಟನಾತ್ಮಕ ಆದ್ಯತೆ, ಅಧ್ಯಾಪಕ ಸಮುದಾಯದ ಕಾಳಜಿ ಮತ್ತು ಜಂಟಿ ಪ್ರಯತ್ನಗಳನ್ನು ಆಧರಿಸಿವೆ. 2009ರಲ್ಲಿ ನಾವು ಒಂದು ಸಂಘಟನೆಯಾಗಿ ಟೊಂಕ್ ಮತ್ತು ಶಿರೋಹಿ ಜಿಲ್ಲೆಗಳಲ್ಲಿದ್ದೆವು. ರಾಜಸ್ತಾನದಲ್ಲಿ ಶಿಕ್ಷಕರಿಗೋಸ್ಕರ ಇರುವ ಬ್ಲೋಕ್ ರಿಸೋರ್ಸ್ ಸೆಂಟರ್ ಮತ್ತು ಕ್ಲಸ್ಟರ್ ರಿಸೋರ್ಸ್ ಸೆಂಟರ್‌ಗಳನ್ನು ಒಳಗೊಂಡ ಇಡಿಯ ಶೈಕ್ಷಣಿಕ ಸಹಕಾರ ವ್ಯವಸ್ಥೆಯನ್ನು ರದ್ದುಗೊಳಿಸಿದ ಸಂದರ್ಭ ಅದು. ಅಂತಹ ಪರಿಸ್ಥಿತಿಯಲ್ಲಿ ನಾವು ಶಿಕ್ಷಕರ ವೃತ್ತಿಪರ ಅಭಿವೃದ್ಧಿಗಾಗಿ ಪರ್ಯಾಯ ವಿಧಾನಗಳ ಹುಡುಕಾಟದಲ್ಲಿದ್ದೆವು. ತಾತ್ವಿಕವಾಗಿ ಭಿನ್ನವಾದ ಆಲೋಚನೆಯೊಂದರ ಕುರಿತ ಚಿಂತನೆ ಅದು. ಅದು ಮೂಲತಃ ಅಧ್ಯಾಪಕರ ಮುಂದಾಳ್ತನದ ಚಿಂತನೆ. ಆ ಆಲೋಚನೆಯ ಪ್ರಕಾರ ಅಧ್ಯಾಪಕ ಎಂದರೆ ಯೋಚಿಸುವ ವ್ಯಕ್ತಿ. ನೌಕರಿಯಲ್ಲಿರುವವರಿಗೆ  ನೀಡುವ ಔಪಚಾರಿಕ ಅಧ್ಯಾಪಕ ತರಬೇತಿ ಕಾರ್ಯಕ್ರಮಗಳ ಬಗ್ಗೆ ಆ ಚಿಂತನೆಗೆ ತಕರಾರುಗಳೇನೂ ಇರಲಿಲ್ಲ. ಸಮಸ್ಯೆ ಬಗೆಹರಿಸುವ ನಮ್ಮ ಪ್ರಯತ್ನದಲ್ಲಿ ಸ್ವ-ಅವಲೋಕನ ಮಾಡಬಯಸುವ ಅಧ್ಯಾಪಕರಿಗಾಗಿ ನಾವು ವೇದಿಕೆಯೊಂದನ್ನು ಒದಗಿಸಲು ನಿರ್ಧರಿಸಿದೆವು. ಅಭಿಪ್ರಾಯ ಹಂಚಿಕೊಳ್ಳುವುದು, ಪ್ರಶ್ನಿಸುವುದು ಮತ್ತು ಪರಸ್ಪರರಿಂದ ಕಲಿಯುವ ವೇದಿಕೆ ಅದು. ಶಾಲೆಗಳಲ್ಲಿನ ಅಧ್ಯಾಪಕನ-ಕಲಿಕಾ ಪ್ರಕ್ರಿಯೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಕುರಿತು ಮುಕ್ತವಾಗಿ ಮಾತನಾಡುವುದಕ್ಕೆ ಅಗತ್ಯ ಇರುವ ಅವಕಾಶ ನೀಡಬೇಕೆನ್ನುವುದು ಪ್ರಧಾನ ಆಲೋಚನೆ ಆಗಿತ್ತು ಮತ್ತು ಆಗಿದೆ. ಹಾಗಾಗಿ ನಾವು ಅಧ್ಯಾಪಕರಿಗಾಗಿ ಸ್ವಯಂಸೇವಾ/ಸ್ವಯಂ ಪ್ರೇರಣೆಯ ಅವಕಾಶಗಳನ್ನು ಸೃಷ್ಟಿಸುವ ನಿರ್ಧಾರ ಮಾಡಿದೆವು.

ಇದೇ ಹೊತ್ತಿಗೆ ಮಾಲ್ಪುರಾ (ಟೊಂಕ್, ರಾಜಸ್ಥಾನ)ದಲ್ಲಿ ಸಮಾನ ಕಾಳಜಿಗಳನ್ನು ಹೊಂದಿದ್ದ ಅಧ್ಯಾಪಕರ ಗುಂಪೊಂದು ಇತ್ತು. ಔದ್ಯೋಗಿಕ ತರಬೇತಿ ಕಾರ್ಯಕ್ರಮಗಳಿಂದ ಅವರು ಬೇಸರಗೊಂಡಿದ್ದರೂ ತಮ್ಮ ತರಗತಿಯ ಅನುಭವಗಳನ್ನು ಹಂಚಿಕೊಳ್ಳಲು ಉತ್ಸುಕರಾಗಿದ್ದರು. ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಇಂತಹ ಅಧ್ಯಾಪಕರನ್ನು ಕಾಣುವುದು ಅಕ್ಷರಶಃ ದುರ್ಲಭವೇ ಆಗಿತ್ತು; ಪ್ರತಿಯೊಂದು ವ್ಯವಸ್ಥೆಯಲ್ಲೂ ಕೆಲವರು ಒಳ್ಳೆಯವರು ಇರುತ್ತಾರೆ ಎಂಬ ನಮ್ಮ ನಂಬಿಕೆ ದೃಢವಾಯಿತು. ಈ ಅಧ್ಯಾಪಕರನ್ನು ಬಳಸಿಕೊಂಡು ನಾವು ಅಧ್ಯಾಪಕ ವೇದಿಕೆಗಳ ಪಯಣ ಆರಂಭಿಸಿದೆವು. ಈಗ ಏಳು ರಾಜ್ಯಗಳಲ್ಲಿ ಈ ವೇದಿಕೆಗಳು ಅಸ್ತಿತ್ವದಲ್ಲಿವೆ. ಅಲ್ಲಿ ನಮ್ಮ ಅಧ್ಯಾಪಕರ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಆಯೋಜಿಸುವಲ್ಲಿ ಪ್ರಧಾನ ಪಾತ್ರವಹಿಸುತ್ತೇವೆ.

## ಪರಿಕಲ್ಪನೆ ಮತ್ತು ಪ್ರಕ್ರಿಯೆ

ಇದು ಸಮಾನ ಕಾಳಜಿಯುಳ್ಳವರ ವೇದಿಕೆಯಾಗಿದ್ದರಿಂದ ಕೆಲಸವೂ ಜಂಟಿಯಾಗಿಯೆ ಮಾಡಲಾಯಿತು. ಪ್ರತಿಷ್ಠಾನದ ತಂಡ ಅಧ್ಯಾಪಕರಲ್ಲಿ ಚರ್ಚೆಗೆ ಅವಕಾಶ ಮಾಡಿಕೊಡುತ್ತಿತ್ತು. ಇಂತಹ ಚರ್ಚೆಗಳು ವೇದಿಕೆಗಳ ಅಸ್ತಿವಾರಕ್ಕೆ ಅಗತ್ಯವಾದ ನಿರ್ದಿಷ್ಟ ಆವರಣ/ಪ್ರಮೇಯ ಮತ್ತು ಕಾರ್ಯಸೂತ್ರಗಳನ್ನು ರೂಪಿಸುವುದಕ್ಕೆ ಅಧ್ಯಾಪಕರಿಗೆ ಅನುಕೂಲ ಮಾಡಿಕೊಡುತ್ತಿತ್ತು. ಆಗಿನ ಆವರಣ ಮತ್ತು ಕಾರ್ಯಸೂತ್ರ ಇಲ್ಲಿ ಮುಂದೆ ತಿಳಿಸಿದಂತೆ ಇದ್ದುವು:

- ಅಧ್ಯಾಪಕ ವೇದಿಕೆ ಒಂದು ಸ್ವ-ಸಹಾಯ ಸಮುದಾಯ ಅಥವಾ ಗುಂಪಿನ ಪರಿಕಲ್ಪನೆಯನ್ನು ಹೊಂದಿದ್ದು ಅದು ತನ್ನದೇ ವೃತ್ತಿಪರ ಅಭಿವೃದ್ಧಿಯ ಹೊಣೆಯನ್ನು ಹೊರುತ್ತದೆ.
- ಇದೊಂದು ಅನೌಪಚಾರಿಕ ವೇದಿಕೆ. ಅಲ್ಲಿ ಅಧ್ಯಾಪಕರು ಒಟ್ಟು ಸೇರಬಹುದು ಮತ್ತು ದೈನಂದಿನ ತರಗತಿಗಳಲ್ಲಿ ತಾವು ಕಂಡುಂಡ ತಮ್ಮ ಅನುಭವಗಳು, ಸಮಸ್ಯೆಗಳು, ಗೆಲುವುಗಳು ಮತ್ತು ಸಾಧನೆಗಳ ಬಗ್ಗೆ ಮಾತಾಡಿಕೊಳ್ಳಬಹುದು.
- ಗುಂಪಿನ ಅಗತ್ಯಗಳನ್ನು ನೆರವೇರಿಸುವ ಮತ್ತು ಸಮಸ್ಯೆಗಳನ್ನು ನಿವಾರಿಸುವ ಪರಿಪೂರ್ಣ ತಜ್ಞರು ಇಲ್ಲ ಎನ್ನುವುದೇ ವೇದಿಕೆಯ ಕೇಂದ್ರ ಗ್ರಹಿಕೆ. ಬದಲಾಗಿ ಪ್ರತಿಯೊಬ್ಬ ಸದಸ್ಯನೂ ಸಾಮೂಹಿಕವಾಗಿ ಪರಿಹಾರ ಕಂಡುಕೊಳ್ಳುವುದಕ್ಕಾಗಿ ಒಟ್ಟಿಗೆ ಕೆಲಸಮಾಡಬೇಕು.
- ಇಲ್ಲಿ ಎದುರಾಗುವ ಸಮಸ್ಯೆಗಳು ಯಾವುದೂ ಸೈದ್ಧಾಂತಿಕ ಅಥವಾ ಕಾಲ್ಪನಿಕ ಸ್ವಭಾವದವುಗಳಲ್ಲ. ಅವೆಲ್ಲ ಜ್ವಲಂತ ಸಮಸ್ಯೆಗಳೇ ಆಗಿದ್ದು, ತನ್ನ ತರಗತಿಯ ಪ್ರಕ್ರಿಯೆಯನ್ನು ಹೆಚ್ಚು ಸಮರ್ಥವಾಗಿಸಲು ಮತ್ತು  ಎಲ್ಲರೂ ಒಳಗೊಳ್ಳುವಂತೆ ಮಾಡಲು ಪ್ರತಿಯೊಬ್ಬ ಅಧ್ಯಾಪಕನೂ ಪರಿಹಾರ ಕಂಡುಕೊಳ್ಳುವಂತಹುದೇ ಆಗಿವೆ.

- ಅಧ್ಯಾಪಕ ವೇದಿಕೆಗಳೆಲ್ಲ ಪ್ರಜಾಪ್ರಭುತ್ವೀಯ ವೇದಿಕೆಗಳಾಗಿವೆ. ಇಲ್ಲಿ ಪಾಲ್ಗೊಳ್ಳುವವರ ನಡುವೆ ಯಾವುದೇ ತರತಮಗಳಿರುವುದಿಲ್ಲ. ವಿಷಯದ ಮೇಲಿನ ಹಕ್ಕು ಸಮಾನವಾಗಿರುತ್ತದೆ. ತಮ್ಮ ಅಧಿಕಾರ ಮತ್ತು ಅಂತಸ್ತಿಗಿಂತ ತಮ್ಮ ತರ್ಕ ಮತ್ತು ಬುದ್ಧಿಮತ್ತೆಯ ಮೂಲಕ ಚರ್ಚೆಯನ್ನು ಪ್ರಭಾವಿಸುವ ಸಾಮರ್ಥ್ಯ ಎಲ್ಲರಿಗೂ ಸಮಾನವಾಗಿರುತ್ತದೆ.
- ಯಾವಾಗ ಮತ್ತು ಎಲ್ಲಿ ಸೇರಬೇಕು, ಏನನ್ನು ಚರ್ಚಿಸಬೇಕು ಮತ್ತು ವೇದಿಕೆಯನ್ನು ಹೇಗೆ ಮುನ್ನಡೆಸಬೇಕು ಎನ್ನುವುದನ್ನೆಲ್ಲ ಗುಂಪು ನಿರ್ಧರಿಸುತ್ತದೆ. ಗುಂಪು ನಿರ್ಧರಿಸಿದ ನಿಯಮಾವಳಿಗಳ ಮೇಲೆ ವೇದಿಕೆ ಕಾರ್ಯನಿರ್ವಹಿಸುತ್ತದೆ.
- ಸಂಖ್ಯೆ ಸಣ್ಣದಾಗಿದ್ದರೂ, ತಮ್ಮದೇ ಆಸಕ್ತಿಯಿಂದ ಒಟ್ಟಾಗಿ ಬಂದ ಅಧ್ಯಾಪಕರಷ್ಟೇ ಗುಂಪಿನಲ್ಲಿ ಒಳಗೊಂಡಿರುತ್ತಾರೆ.
- ಇಲ್ಲಿ ಪ್ರಯಾಣ ಭತ್ಯೆ ಅಥವಾ ದಿನಭತ್ಯೆಯಂತಹ ಯಾವುದೇ ಆರ್ಥಿಕ ಸೌಲಭ್ಯಗಳಿರುವುದಿಲ್ಲ. ಅಧ್ಯಾಪಕರು ತಮ್ಮದೇ ಖರ್ಚಿನಲ್ಲಿ ಬರುತ್ತಾರೆ. ತಮಗೆ ಪ್ರಯಾಣಿಸಲು ಅನುಕೂಲಕರವಾದ ಸ್ಥಳವನ್ನಷ್ಟೇ ನಿಗದಿಪಡಿಸುತ್ತಾರೆ.
- ಎಲ್ಲಾ ವಿಷಯಗಳನ್ನು ಚರ್ಚಿಸುವುದಕ್ಕೆ ಎರಡು ಮೂರು ಗಂಟೆಗಳು ಸಾಲುವುದಿಲ್ಲ. ಹಾಗಾಗಿ ಆಳವಾದ ಮತ್ತು ವಿಸ್ತಾರವಾದ ಚರ್ಚೆ ಬಯಸುವ ವಿಷಯಗಳಿಗಾಗಿ ನಾವು ಶಾಲೆಯೊಳಗೆ ಸ್ಥಳೀಯ ಅಧ್ಯಾಪಕ ವೇದಿಕೆಗಳನ್ನು ಹೊಂದಬಹುದು.

ಅಧ್ಯಾಪಕ ಸಮುದಾಯದ ಈ ಆವರಣ/ಪ್ರಮೇಯ ಮತ್ತು ಕಾರ್ಯಸೂತ್ರಗಳನ್ನು ರೂಪಿಸುವುದಕ್ಕೆ ನಮಗೆ ಒಂದು ವರ್ಷವೇ ಬೇಕಾಯಿತು. ಇದರ ಜತೆಜತೆಗೇ ಅಧ್ಯಾಪಕ ವೇದಿಕೆಗಳೂ ನಡೆಯುತ್ತಿದ್ದವು.

ಇದೇಕೆ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ ?

ದೇಶದ ಪ್ರಸ್ತುತ ಶಿಕ್ಷಣ ಸಂದರ್ಭದಲ್ಲಿ ಅನೇಕ ವಿಷಯಗಳು ನಿರಾಶಾದಾಯಕ, ನಿರುತ್ಸಾಹಕರ ಮತ್ತು ಅಪಾಯಕಾರಿಯಾಗಿ ಕಾಣಿಸುತ್ತಿದೆ. ಅಂಥದ್ದರಲ್ಲಿ ಈ ಬಗೆಯ ಚಟುವಟಿಕೆಗಳು ಒಂದಷ್ಟು ಅನುಮಾನ ಮತ್ತು ಅಪನಂಬಿಕೆಗಳನ್ನಷ್ಟೇ ಹುಟ್ಟುಹಾಕುತ್ತವೆ. ಆದರೆ ವಸ್ತುಸ್ಥಿತಿ ಏನೆಂದರೆ ದೇಶದಾದ್ಯಂತ ಇಂತಹ ವೇದಿಕೆಗಳಲ್ಲಿ ಹತ್ತುಸಾವಿರಕ್ಕೂ ಹೆಚ್ಚು ಸದಸ್ಯರಿರುವುದು ಇಂತಹ ವೇದಿಕೆಗಳ ಜನಪ್ರಿಯತೆ ಮತ್ತು ಗೆಲುವಿಗೆ ಒಳ್ಳೆಯ ಸೂಚಕ. ಇದನ್ನು ವಿವಿಧ ವೇದಿಕೆಗಳಲ್ಲಿ ಚರ್ಚೆ ಮಾಡಿದಾಗ ಜನ ನಂಬದೆ ಒಂದೇ ಪ್ರಶ್ನೆಯನ್ನು ಪದೇ ಪದೇ ಕೇಳುತ್ತಾರೆ- ಅಧ್ಯಾಪಕರಿಗೆ ಇದರ ಹಿಂದಿರುವ ಪ್ರೇರಣೆ ಏನು?

1. ಪರಸ್ಪರ ವಿನಿಮಯದ ಕೆಲಸ ಮತ್ತು ಗೌರವ- ಸಾಮಾಜಿಕ ರಚನೆಯ/ಕಲ್ಪನೆಯ ಪ್ರಕಾರ ವಿನಿಮಯ ಎಂದರೆ ಆತ್ಮೀಯವಾದ ಕ್ರಿಯೆಗಳಿಗೆ ಜನ ಸ್ವ-ಆಸಕ್ತಿಯ ಮಾದರಿಗಿಂತ ಹೆಚ್ಚು ಸಹಕಾರಿ ಮಾದರಿಯಲ್ಲಿ ಉತ್ತಮವಾಗಿ ಪ್ರತಿಕ್ರಿಯಿಸುತ್ತಾರೆ ಎನ್ನುವುದೇ ಆಗಿದೆ. ತದ್ವಿರುದ್ಧವಾಗಿ ಆಕ್ರಮಣಕಾರಿ ಕ್ರಿಯೆಗಳಿಗೆ ಜನ ಹೆಚ್ಚು ಕೆಟ್ಟದಾಗಿ ಮತ್ತು ಕ್ರೂರವಾಗಿ ಪ್ರತಿಕ್ರಿಯಿಸುತ್ತಾರೆ. ಇದೇ ಅಧ್ಯಾಪಕ ಸಮುದಾಯದಿಂದ ಬರುವ ವ್ಯಕ್ತಿಗಳು ತಮ್ಮ ಸಹೋದ್ಯೋಗಿಗಳ ವೃತ್ತಿಪರ ಅಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳುವುದನ್ನು ನೀವು ನೋಡಿದರೆ ಇಲ್ಲೊಂದು ಪರಸ್ಪರ ವಿನಿಮಯದ ಧೋರಣೆ ಇರುವುದು ಕಾಣಿಸುತ್ತದೆ. ಇಂತಹ ವೇದಿಕೆಗಳಲ್ಲಿ ಕೇವಲ ಭಾಗವಹಿಸುವುದೂ ಕೂಡಾ ಒಂದು ಕೊಡುಗೆಯೇ. ನಾವು ಗಮನಿಸಿದಂತೆ ತಮ್ಮ ತರಗತಿಯಲ್ಲಿ ಕೆಲ ಕೆಲಸವನ್ನು ಮಾಡುತ್ತಿರುವ ಅಧ್ಯಾಪಕರು ತಮ್ಮ ಕೆಲಸಕ್ಕೆ ಗೌರವವನ್ನು ನಿರೀಕ್ಷಿಸುತ್ತಾರೆ. ಪರಸ್ಪರ ವಿನಿಮಯ ಮತ್ತು ಗೌರವ ಇವೆರಡೂ ಪ್ರಮುಖ ಆಲೋಚನೆಗಳ ಮೇಲೆಯೇ ಈ ವೇದಿಕೆಗಳು ಕಾರ್ಯನಿರ್ವಹಿಸುತ್ತವೆ.

> ಕೆಲ ವರ್ಷಗಳ ಹಿಂದೆ ಭೂಕಂಪ ಕಾಣಿಸಿಕೊಂಡಾಗ ಗ್ರೀಸ್ ಮತ್ತು ಟರ್ಕಿ ಎಂಬ ಎರಡೂ ದೇಶಗಳು ಪರಸ್ಪರ ಸ್ವಯಂ ಸೇವೆಯ ವಿನಿಮಯ ಮಾಡಿಕೊಂಡವು. ಎರಡೂ ದೇಶಗಳ ನಡುವಣ ಈ ಸ್ವಯಂಸೇವಾ ಸಹಯೋಗವು ಮುಂದೆ ಬರಲಿರುವ ಭವಿಷ್ಯದ ವಿಕೋಪಗಳ ಸಂದರ್ಭಕ್ಕಾಗಿ ಎರಡೂ ದೇಶಗಳ ಒಪ್ಪಂದಕ್ಕೆ ದಾರಿ ಮಾಡಿಕೊಟ್ಟಿತು.
> ಗ್ಲೋಬಲ್ ರಿಸರ್ಚ್- ವೊಲ್ಯುಂಟರಿಸಂ ಅಂಡ್ ಕೆಪಾಸಿಟಿ ಡೆವಲಪ್‌ಮೆಂಟ್ (2002)

> ಉದಾಹರಣೆಗೆ, ಆಂಡೀಸ್‌ನಲ್ಲಿ ಮಿಂಗಾಸ್ ಆರ್‌ಫೇನಾಸ್ ಎಂಬ ಸಾಂಪ್ರದಾಯಿಕ ವಿಧಾನಗಳನ್ನು ಆಚರಿಸುವ ಸಮುದಾಯದವರು ಒಟ್ಟುಗೂಡಿ ಎಲ್ಲರ ಒಳಿತಿಗಾಗಿ ಕೆಲಸವನ್ನು ಹಂಚಿಕೊಳ್ಳುತ್ತಾರೆ. ಇಂತಹ ಸಂಪ್ರದಾಯಗಳು ಆಫ್ರಿಕಾ ಮತ್ತು ಏಷಿಯಾಗಳಲ್ಲಿ ಅಸ್ತಿತ್ವದಲ್ಲಿವೆ. ದಾಖಲೆಗಳು ತೋರಿಸುವ ಪ್ರಕಾರ ಇಂತಹ ಪರಸ್ಪರ ವಿನಿಮಯದ ಕೆಲಸ ಎನ್ನುವುದು ಶತಮಾನಗಳಿಂದಲೂ ಇವೆ. ಗ್ಲೋಬಲ್ ರಿಸರ್ಚ್ - ವೊಲ್ಯುಂಟರಿಸಂಅಂಡ್ ಕೆಪಾಸಿಟಿ ಡೆಲಪ್‌ಮೆಂಟ್ (2002)

2. ವೃತ್ತಿಯ ಪರ ಐಕ್ಯತೆ : ಪ್ರತಿ ಸಮುದಾಯದಲ್ಲೂ ಒಳ್ಳೆಯ ವ್ಯಕ್ತಿಗಳು ಇರುತ್ತಾರೆ ಹಾಗೂ ಇದಕ್ಕೆ ಶಿಕ್ಷಕ ಸಮುದಾಯ ಹೊರತಲ್ಲ. ಮಾಲ್ಪುರಾದಲ್ಲಿ ಇಂಥದ್ದೊಂದು ವೇದಿಕೆ ಸಂಘಟಿಸಿದ್ದು ಬಹಳ ಹಿಂದೇನಲ್ಲ. ಇಂತಹ ಗುಂಪನ್ನು

ಆರಂಭಿಸುವುದಕ್ಕೆ ನಿಮಗೆ ಇರುವ ಪ್ರೇರಣೆ ಏನು ಎಂಬ ಅದೇ ಪ್ರಶ್ನೆಯನ್ನು ಅಲ್ಲಿನ ಶಿಕ್ಷಕರಿಗೆ ಕೇಳಲಾಗಿತ್ತು. ಅಲ್ಲೊಬ್ಬರು ಅದ್ಭುತ ಉತ್ತರ ನೀಡಿದ್ದರು: ನಾನು ಇಲ್ಲಿಗೆ ಮೂರು ಕಾರಣಗಳಿಗಾಗಿ ಬರುತ್ತೀನಿ; ಒಬ್ಬ ಶಿಕ್ಷಕ ತನ್ನ ವಿಷಯಕ್ಕೆ, ವೃತ್ತಿಗೆ ಮತ್ತು ದೇಶಕ್ಕೆ ಪ್ರಾಮಾಣಿಕನಾಗಿರಬೇಕು; ಇದರ ಮೂಲ ರಚನೆಗೆ ಧಕ್ಕೆಯಾಗದಂತೆ ಇದನ್ನು ಹಿಂದಿಯಲ್ಲಿ ಹೇಳಿದರೆ, "ವಿಷಯ್‌ಕೆ ಪ್ರತಿ ಇಮಾನ್‌ದಾರಿ, ಪೇಶೆ ಕೆ ಪ್ರತಿ ಇಮಾನ್‌ದಾರಿ ಔರ್ ದೇಶ್ ಕೆ ಪ್ರತಿ ಇಮಾನ್‌ದಾರಿ

3. ಪರಸ್ಪರ ಕಾಳಜಿ - ಶಿಕ್ಷಕರು ತೋರಿದ ಕಾಳಜಿಯ ತಳಹದಿಯಲ್ಲೇ ವೇದಿಕೆಯನ್ನು ಕಟ್ಟಲಾಗಿದೆ. ನಾವೂ ಅವರ ಜತೆಗೆ ಅದನ್ನೇ ಹಂಚಿಕೊಳ್ಳುತ್ತೇವೆ. ಈ ಬಗೆಯ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ಪರಸ್ಪರ ಕಾಳಜಿಯ ಉಪಕ್ರಮಗಳು ತಮ್ಮ ಗುರಿಯನ್ನು ಯಾಕೆ ಸಾಧಿಸಿಕೊಳ್ಳುತ್ತವೆ ಎನ್ನುವುದನ್ನು ಇವು ಸಾಬೀತು ಮಾಡಲಿವೆ.

4. ಅಭಿಮಾನ, ಅಸ್ಮಿತೆ ಮತ್ತು ಪ್ರತಿಷ್ಠೆ - ಕಳೆದು ಹೋದ ತಮ್ಮ ಅಸ್ಮಿತೆ ಮತ್ತು ಪ್ರತಿಷ್ಠೆಯನ್ನು ಮತ್ತೆ ಗಳಿಸಲು ಇಂತಹ ವೇದಿಕೆಗಳು ಸಹಾಯ ಮಾಡುತ್ತದೆ ಎನ್ನುವುದನ್ನು ವಿಟಿಎಫ್‌ಗಳ ಮೇಲೆ ಇತ್ತೀಚೆಗೆ ನಾವು ನಡೆಸಿದ ಸಂಶೋಧನೆಯ ಪ್ರಾಥಮಿಕ ಫಲಿತಾಂಶಗಳು ಸೂಚಿಸುತ್ತವೆ. ನಮ್ಮ ಸಂಶೋಧನೆಯಲ್ಲಿ ಪಾಲ್ಗೊಂಡ ಅನೇಕ ಶಿಕ್ಷಕರು ಹೇಳಿದ್ದೇನೆಂದರೆ ಇಂತಹ ವೇದಿಕೆಯ ಭಾಗವಾಗಿರುವುದು ಶಿಕ್ಷಕ ಸಮುದಾಯ ಮತ್ತು ಜಿಲ್ಲಾಡಳಿತದ ವಲಯದಲ್ಲಿ ಉತ್ತಮ ಹಾಗೂ ಮೌಲ್ಯಯುತ ಎಂದು ಭಾವಿಸಲಾಗುತ್ತಿದೆ ಎಂದು.

ಅಣ್ಣಾ ಹಝಾರೆ ಆಂದೋಲನದಂತಹ ವಿಷಯಗಳ ಕುರಿತ ಶಿಕ್ಷಕರ ಚರ್ಚೆಯು ಗುಂಪಿನ ಪ್ರೌಢತೆಯನ್ನು ಮತ್ತು ಬೃಹತ್ ಸಾಮಾಜಿಕ ವಿಷಯಗಳಲ್ಲಿ ಭಾಗಿಯಾಗುತ್ತಿರುವುದನ್ನು ತೋರಿಸುತ್ತದೆ.

**ಕಲಿಕೆ/ ವಿಮರ್ಶಾತ್ಮಕ ಗುಣಗಳು:**

ಇಂತಹ ವೇದಿಕೆಗಳ ಏಳಿಗೆ ಹಾಗೂ ನಿರಂತರತೆಗೆ ಬೇಕಾದ ಹೊಣೆಗಾರಿಕೆಯ ಗುಣಗಳ ಕುರಿತು ಗುಂಪಿನ ಮತ್ತು ಶಿಕ್ಷಕರ ನಿರಂತರ ಚರ್ಚೆ -ಚಿಂತನೆ ನಡೆಯುತ್ತವೆ. ನಮ್ಮನಮ್ಮಲಿಯೇ ನಿರಂತರವಾಗಿ ನಡೆದ ತರ್ಕಬದ್ಧ ಚರ್ಚೆಗಳ ನಂತರ ಇಂತಹ ವೇದಿಕೆಗಳು ನಡೆಯುತ್ತಿರುವ ಹಿಂದಿನ ಕಾರಣಗಳು/ವಿಚಾರಗಳನ್ನು ಗುರುತಿಸಿದ್ದೇವೆ :

1. ನಿಷ್ಠೆ ಹಾಗೂ ನಂಬಿಕೆ- ಅತ್ಯಂತ ನಿಷ್ಠೆಯ ಹಾಗೂ ಎಲ್ಲರ ಒಳಿತಿನ ವಿಚಾರಕ್ಕಾಗಿ ಸಾಮೂಹಿಕ ಕ್ರಿಯೆಯಲ್ಲಿ ನಂಬಿಕೆ ಇರಿಸಿದ ಮುಖ್ಯ ಸದಸ್ಯರಿರುವ ವೇದಿಕೆಗಳಲ್ಲಿ ಜನರ ಸಾಮರ್ಥ್ಯಗಳಲ್ಲಿ ಸ್ಪಷ್ಟ ವ್ಯತ್ಯಾಸ ಕಾಣಿಸುವುದು ನಮ್ಮ ಅನುಭವಕ್ಕೆ ಬಂದಿದೆ.
2. ಮಾಲಿಕತ್ವ ಮತ್ತು ಉಪಕ್ರಮ- ವೇದಿಕೆಯ ಆರಂಭದ ದಿನಗಳಲ್ಲಿ ನಾವು ಗಮನಾರ್ಹ ಪಾತ್ರ ವಹಿಸಿದ್ದಾಗಿನ ಸಮಯಕ್ಕೆ ಹೋಲಿಸಿದಾಗ, ಪ್ರತಿಷ್ಠಾನ ಮತ್ತು ಅಧ್ಯಾಪಕರು ಜಂಟಿಯಾಗಿ ಆರಂಭಿಸಿದ ವೇದಿಕೆಗಳು ಈಗ ಅಧ್ಯಾಪಕ ಸಮುದಾಯದ್ದೇ ಮಾಲಿಕತ್ವ ಹೊಂದಿದೆ. ಜಂಟಿ ಮಾಲಕತ್ವವನ್ನು ಹೊಂದಲು ವಿಫಲವಾದ ಕಡೆಗಳಲ್ಲೆಲ್ಲ ನಾವು ಅಧ್ಯಾಪಕರೊಂದಿಗಿನ ಚರ್ಚೆಯನ್ನು ಜೀವಂತವಾಗಿಡುವುದಕ್ಕೆ ಸಾಕಷ್ಟು ಹೋರಾಟ ಮಾಡಿದ್ದೇವೆ.
3. ಸಂಪನ್ಮೂಲ ಕ್ರೋಢೀಕರಣ- ವೇದಿಕೆಗಳ ನಿರಂತರತೆಯನ್ನು ಖಾತರಿಪಡಿಸುವಲ್ಲಿ ಇದೊಂದು ಗಂಭೀರ ವಿಚಾರ. ಸ್ಥಳೀಯ ಸಂಪನ್ಮೂಲಗಳನ್ನು ಕ್ರೋಢೀಕರಿಸಿದ (ಸಂಪನ್ಮೂಲ ವ್ಯಕ್ತಿ, ಟಿಎಲ್ಎಂ, ವಿಷಯ ಇತ್ಯಾದಿ) ವೇದಿಕೆಗಳು, ಪ್ರತಿಷ್ಠಾನದ ಮೇಲೆ ಅನಗತ್ಯ ಅವಲಂಬನೆ ಹೊಂದಿರುವ ವೇದಿಕೆಗಳಿಗೆ ಹೋಲಿಸಿದಲ್ಲಿ ಹೆಚ್ಚು ವ್ಯವಸ್ಥಿತವಾಗಿರುತ್ತವೆ.
4. ವ್ಯವಹಾರದ ಗುಣಮಟ್ಟ- 2011ರಲ್ಲಿ ಅಧ್ಯಾಪಕರ ಹಾಜರಾತಿ ಕಡಿಮೆಯಾಗುತ್ತಿದೆ ಎನ್ನುವುದನ್ನು ನಾವು ಪತ್ತೆಮಾಡಿದೆವು. ಇದಕ್ಕಿರುವ ಎರಡು ಕಾರಣಗಳನ್ನು ಗುರುತಿಸಬಹುದು:
   ಅ. ಚರ್ಚೆಗಳು ವ್ಯವಸ್ಥಿತವಾಗಿರಲಿಲ್ಲ ಮತ್ತು ಪ್ರತಿಯೊಂದು ವೇದಿಕೆಯ ಸಿದ್ಧತೆ ನಿರೀಕ್ಷಿತ ಗುಣಮಟ್ಟ ಹೊಂದಿರಲಿಲ್ಲ. ಆ. ನಾವು ಹಿಂದಿನದ್ದಕ್ಕಿಂತ ಒಂದು ಹಂತ ಮೇಲೆ ಏರಿ ಕಾರ್ಯನಿರ್ವಹಿಸಬೇಕೆಂದು ಅಧ್ಯಾಪಕರು ಈಗ ಬಯಸಿದ್ದರು.

   ವ್ಯವಹಾರದ ಗುಣಮಟ್ಟವು ಎರಡು ಮುಖ್ಯ ವಿಚಾರಗಳನ್ನು ಅವಲಂಬಿಸಿದೆ: ಒಂದು ಘಟಕದ ಸಿದ್ಧತೆ/ಗುಣಮಟ್ಟ ಹಾಗೂ ಸಂಪನ್ಮೂಲ ವ್ಯಕ್ತಿಗಳ ಗುಣಮಟ್ಟ. ಇಲ್ಲಿ ಕಂಡುಕೊಂಡದ್ದೇನೆಂದರೆ ಈ ಎರಡೂ ವಿಷಯಗಳನ್ನು ನಿಯಂತ್ರಿಸಿದಾಗ ಅತ್ಯಂತ ತ್ವರಿತಗತಿಯಲ್ಲಿ ಸಮಸ್ಯೆಯಿಂದ ಪಾರಾಗುವುದು ಸಾಧ್ಯವಾಯಿತು. ಈ ವೇದಿಕೆಗಳ ಗೆಲುವಿಗೆ ಇದೊಂದು ಅತ್ಯಂತ ಮುಖ್ಯ ಕಾರಣವಾಗಿ ಉಳಿದಿದೆ.
5. ಶಾಲೆಯೊಳಗಿನ ಸ್ಥಳೀಯ ಅಧ್ಯಾಪಕ ವೇದಿಕೆಗಳ/ಕಮ್ಮಟಗಳಲ್ಲಿ ವಿಷಯಗಳ ಉನ್ನತೀಕರಣ - ನಿಯಮಿತವಾಗಿ 2-3 ಗಂಟೆಗಳ ಕಾಲ ವಿಷಯಗಳನ್ನು ಚರ್ಚಿಸುವುದಕ್ಕೆ ಸಾಕಾದರೂ, ಎಲ್ಲ ವಿಷಯಗಳನ್ನು ಇಂತಹ ಸೀಮಿತ ಅವಧಿಯಲ್ಲಿ ಚರ್ಚಿಸುವುದಕ್ಕೆ ಸಾಧ್ಯವಿಲ್ಲ. ಕೆಲವು ವಿಷಯಗಳನ್ನು ಚರ್ಚಿಸುವುದಕ್ಕೆ ಹೆಚ್ಚಿನ ಶೈಕ್ಷಣಿಕ ಪರಿಶ್ರಮ ಮತ್ತು ಸಮಯ

ಬೇಕಾಗುತ್ತದೆ. ಇದನ್ನು ಗಮನದಲ್ಲಿ ಇರಿಸಿಕೊಂಡು ಶಾಲೆಯೊಳಗೆ ಸ್ಥಳೀಯ ಅಧ್ಯಾಪಕ ವೇದಿಕೆಗಳನ್ನು ರೂಪಿಸಿದೆವು ಅಥವಾ ಅಂತಹ ವಿಷಯಗಳನ್ನು ಕಮ್ಮಟಗಳಲ್ಲಿ ನಿಭಾಯಿಸಿದೆವು.

ಉನಿಯಾರ ಬ್ಲಾಕ್‌ನ ಅಧ್ಯಾಪಕರು (ಟೋಂಕ್, ರಾಜಸ್ತಾನ್) ಪ್ರತಿಯೊಬ್ಬರ ತರಗತಿಗಳನ್ನು ಆಗ್ಗಿಂದಾಗ್ಗೆ ಸೂಕ್ಷ್ಮ ಅವಲೋಕನಕ್ಕೆ ಒಳಪಡಿಸಿದ್ದಾರೆ ಹಾಗೂ ಅದರ ಸುತ್ತ ಚರ್ಚೆಯನ್ನು ಕೈಗೊಂಡಿದ್ದಾರೆ. ಅಧ್ಯಾಪಕರು ಅಂತಹ ಪ್ರಗತಿಪರ ಆಲೋಚನೆಗಳೊಂದಿಗೆ ಮುಂದೆ ಬರಬೇಕಾಗಿದೆ ಹಾಗೂ ಅಂತಹ ಆಲೋಚನೆಗಳನ್ನು ಹೊಂದಿರಬೇಕು.

ಮೈಲುಗಳ ದೂರ...

ಒಟ್ಟು ಆಲೋಚನೆ ಅರಳಿದ ರೀತಿ ನಿಜವಾಗಿಯೂ ರೋಮಾಂಚಕಾರಿ ಮತ್ತು ಸವಾಲಿನದ್ದೂ ಆಗಿದೆ. ಆದರೆ ಕೆಳಹಂತದಲ್ಲಿ ಎಲ್ಲೋ ಕೆಲಸ ನಡೆದಿದೆ. ಪ್ರಸ್ತುತ ಸ್ವಯಂಸೇವಾ/ಸ್ವಯಂ ಪ್ರೇರಿತ ಅಧ್ಯಾಪಕ ವೇದಿಕೆಗಳು ಜಿಲ್ಲೆಯೊಂದರ ಅಧ್ಯಾಪಕ ವೃತ್ತಿಪರತೆ ಅಭಿವೃದ್ಧಿಯ ಸಮಗ್ರ ಯೋಜನೆಯ ಅನಿವಾರ್ಯ ಭಾಗವಾಗಿ ರೂಪುಗೊಂಡಿದೆ. ಇದೇ ಆಲೋಚನೆಯನ್ನು ಬಳಸಿಕೊಂಡು ಹೆಚ್ಚಿನ ಸಂಖ್ಯೆಯ ಅಧ್ಯಾಪಕರನ್ನು ತಲುಪುವುದು ಹೇಗೆ, ಗುಂಪಿನ ವೈವಿಧ್ಯಮಯ ಬೇಡಿಕೆಗಳನ್ನು ಪೂರೈಸುವುದು ಹೇಗೆ, ಕೆಲ ಅಧ್ಯಾಪಕರು ತಮ್ಮ ತರಗತಿಯಲ್ಲಿ ಪ್ರಯೋಗಗಳನ್ನು ನಡೆಸುತ್ತಿರಬೇಕಾದರೆ ಎಲ್ಲ ಅಧ್ಯಾಪಕರು ತಮ್ಮ ಶಾಲೆಗಳಲ್ಲಿ ಅಧ್ಯಾಪನ ಕಲಿಕೆಯ ರಚನಾತ್ಮಕ ಆಲೋಚನೆಗಳನ್ನು ಬಳಸಿಕೊಳ್ಳುತ್ತಾರೆ ಎಂದು ಖಾತರಿಪಡಿಸಿಕೊಳ್ಳುವುದು ಹೇಗೆ- ಮುಂದುವರೆಯುತ್ತಾ ಇಂತಹ ಕೆಲವು ಪ್ರಶ್ನೆಗಳಿಗೆ ನಾವು ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ. ನಮಗೆ ನಮ್ಮ ಆಲೋಚನೆಯಲ್ಲಿ ಸಂಪೂರ್ಣ ನಂಬಿಕೆ ಇದೆ. ವೈಯಕ್ತಿಕ ಮಟ್ಟದಲ್ಲಿ ಅಧ್ಯಾಪಕ ವೃತ್ತಿಪರತೆ ಅಭಿವೃದ್ಧಿಯನ್ನು ಹೊಂದುವುದಕ್ಕೆ ಈ ಆಲೋಚನೆ ಅತ್ಯುತ್ತಮವಾದೊಂದು ದಾರಿಯಾಗಿ ಮೂಡಿಬರಲಿದೆ ಎಂಬ ನಂಬಿಕೆ ನಮಗೆ ಇದೆ. ಹಾಗೆ ನಂಬುವುದಕ್ಕೆ ನಮಗೆ ಸೂಕ್ತ ಕಾರಣವೂ ಇದೆ.

2006 ರಿಂದ ಅಭಿಷೇಕ್ ಅಜೀಮ್ ಪ್ರೇಮ್ಜಿ ಫೌಂಡೇಶನ್ನಿನ ಒಡನಾಟದಲ್ಲಿದ್ದಾರೆ. ಕಂಪ್ಯೂಟರ್ ಪ್ರೇರಿತ ಕಲಿಕೆ, ಕಾರ್ಯಪುಸ್ತಕ ಅಭಿವೃದ್ಧಿ, ಸಂಶೋಧನೆ, ಕಲಿಯುವವರ ವ್ಯಾಪಕ ಮಾಪನ ಹಾಗೂ ಶಿಕ್ಷಕರು, ಮುಖ್ಯ ಶಿಕ್ಷಕರು ಮತ್ತು ಶಿಕ್ಷಣ ಕಾರ್ಯಕರ್ತರಿ ವೃತ್ತಿಪರ ಬೆಳವಣಿಗೆ ಇವುಗಳಿಗೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ರಾಜಸ್ಥಾನದ ಟೋಂಕ್ ಜಿಲ್ಲೆಯ ಅಜೀಂ ಪ್ರೇಮ್ಜೀ ಶಾಲೆ ಮತ್ತು ಜಿಲ್ಲಾ ಕೇಂದ್ರದ ಹುಟ್ಟು ಮತ್ತು ಬೆಳವಣಿಗೆಗೆ ಸಾಕಷ್ಟು ಶ್ರಮಿಸಿದ್ದಾರೆ. ಸದ್ಯ ಅವರು ಅಜೀಮ್ ಪ್ರೇಮ್ಜಿ ಫೌಂಡೇಶನ್ನಿನ ರಾಜಸ್ಥಾನದ ರಾಜ್ಯ ಘಟಕದ ನೇತೃತ್ವ ವಹಿಸಿದ್ದಾರೆ. ಅವರನ್ನು abhishek@azimpremjifoundation.org ಮೂಲಕ ಸಂಪರ್ಕಿಸಬಹುದು.